‘ಹೊಸ ಸಹಜತೆ’ಯ ವಿವರಣೆ

-ಹೃದಯಕಾಂತ್ ದಿವಾನ್

ಮೊದಲಿಗೆ ‘ಹೊಸ ಸಹಜತೆ' (new normal) ಬಗ್ಗೆ ನಾವು ಮಾತನಾಡಬೇಕೇ ಎಂಬುದನ್ನು ಪರಿಶೀಲಿಸಬೇಕಾದದ್ದು ಮುಖ್ಯವಾಗಲಿದೆ. ಕೋವಿಡ್-19ರ ಪರಿಸ್ಥಿತಿ ದೀರ್ಘಕಾಲದ್ದಾದರೂ,ಅದಿನ್ನೂ ತಾತ್ಕಾಲಿಕ ಮತ್ತು ಕ್ರಮೇಣ ಕಡಿಮೆಯಾಗಿ ಶಾಲೆಗಳು ಎಂದಿನಂತೆ ಮೊದಲಿನ ಸ್ಥಿತಿಗೆ ಮರಳುತ್ತವೆ ಎಂದು ಆಲೋಚಿಸುತ್ತಾ ಸಮರ್ಥಿಸಿಕೊಳ್ಳಬಹುದು. ಇಂಥ ಪ್ರತಿಕ್ರಿಯೆಯು ಕಳೆದ ಒಂದೂವರೆ ವರ್ಷಗಳ ಗಂಭೀರ ಪರಿಸ್ಥಿತಿಯನ್ನು ಲೆಕ್ಕಿಸುವಲ್ಲಿ ಹಾಗು ಅದು ಸೃಷ್ಟಿಸಿದ ಸಂವಾದಗಳನ್ನು, ಶಾಲೆ ಮತ್ತು ಶಿಕ್ಷಣವನ್ನು ಹೊಸ ದಿಕ್ಕಿನೆಡೆಗೆ ಎಳೆದಿದ್ದನ್ನು ಪರಿಗಣಿಸುವಲ್ಲಿ ಸೋಲುತ್ತದೆ. ತಂತ್ರಜ್ಞಾನದ ಹೆಚ್ಚಿನ ಬಳಕೆ ಮತ್ತು ತಂತ್ರಜ್ಞಾನದೊಂದಿಗೆ ಜೋಡಿಸಲ್ಪಟ್ಟ ಶೈಕ್ಷಣಿಕ ಪದ್ಧತಿಗೆ ಬದಲಾಗಬೇಕೆಂಬ ಸಲಹೆಗಳು ಬಂದಿವೆ. ಉನ್ನತ ಶಿಕ್ಷಣ ಪಡೆಯಲಿಚ್ಛಿಸುವವರನ್ನು ಮತ್ತು ಕನಿಷ್ಠ ಅಗತ್ಯಗಳನ್ನು ಪೂರೈಸುವ ಕೆಲವು ಮೂಲಭೂತ ಅಂಶಗಳ ಕಲಿಕೆಯನ್ನು ಪ್ರತ್ಯೇಕಿಸಬೇಕೆಂಬ ಸಲಹೆಗಳೂ ಬಂದಿವೆ. ಇವು ಮತ್ತು ಇನ್ನಿತರ ಅಂಶಗಳಿಂದಾಗಿ ನಾನು ಹೊಸ ಯಥಾಸ್ಥಿತಿಯ ಬಗ್ಗೆ ಮಾತನಾಡಲೇಬೇಕಾಗಿದ್ದು, ಸಂವಿಧಾನಾತ್ಮಕ ಬದ್ಧತೆಯನ್ನು ಹಾಗು ಅದನ್ನು ಉಳಿಸಿಕೊಳ್ಳಲು ಬೇಕಾದ ಉಪಕ್ರಮಗಳನ್ನು ಖಾತ್ರಿಗೊಳಿಸಲು ಈ ಮಾರ್ಗ ಚ್ಯುತಿ, ಸ್ಥಿತ್ಯಂತರ ಮತ್ತು ಹೋರಾಟಗಳ ಬಗ್ಗೆ ತಿಳಿದುಕೊಳ್ಳಬೇಕಾಗುತ್ತದೆ. ಒಂದು ಸಮಾಜವಾಗಿ ನಾವು ಎದುರಿಸುತ್ತಿರುವ ಒತ್ತಡ ಹಾಗು ನಮ್ಮ ಬದುಕಿನ ರೀತಿ ಮತ್ತು ಸಂಪನ್ಮೂಲದ ಬಳಕೆಯಲ್ಲಿ ನಾವು ಅನುಸರಿಸುತ್ತಿರುವ ಸುಸ್ಥಿರವಲ್ಲದ ಮಾರ್ಗಗಳಿಂದ ಹೆಚ್ಚುತ್ತಿರುವ ಅಸಮಾನತೆಯಿಂದ ಉಂಟಾಗುತ್ತಿರುವ ಸಂಕಷ್ಟದಿಂದಾಗಿ ನಾವು ಈ ಹೊಸ ಸಹಜತೆಯ ಬಗ್ಗೆ ಆಲೋಚಿಸಲೇಬೇಕಾದ ಸ್ಥಿತಿ ಇದೆ; ಮತ್ತು, ಹೊಸ ಯಥಾಸ್ಥಿತಿಯ ಮೂಲಾಂಶಗಳು ದೀರ್ಘಕಾಲದಿಂದ ಸಾರ್ವಜನಿಕ ಸಂವಾದದ ಭಾಗವಾಗಿದ್ದವು ಮತ್ತು ಕೆಲವೇ ಕೆಲವು ಮೂಲಭೂತ ತತ್ವಗಳನ್ನು ಪ್ರಸ್ತುತ ಕಾಲದ ಸನ್ನಿವೇಶದಲ್ಲಿ ಮರುವ್ಯಾಖ್ಯಾನಿಸಬೇಕಿದೆ ಎಂಬುದನ್ನು ನಾವು ಅರ್ಥ ಮಾಡಿಕೊಳ್ಳಬೇಕಿದೆ. ಕೋವಿಡ್-19ರ ಅನುಭವಗಳು ಹಲವು ರೀತಿಯಲ್ಲಿ ಜರ್ಜರಿತಗೊಳಿಸುವಂತಿದ್ದವು. ಸಾಂಕ್ರಾಮಿಕ ಇನ್ನೂ ಕಣ್ಮರೆಯಾಗಿಲ್ಲ ಮತ್ತು ಅದು ಯಾವಾಗ ಸಂಪೂರ್ಣವಾಗಿ ಹೋಗುತ್ತದೆ ಎನ್ನುವುದು ನಮಗೆ ಸ್ಪಷ್ಟವಿಲ್ಲ. ಸೋಂಕು ಕಡಿಮೆಯಾದಂತೆ ಅದು ವಾಪಸ್ ಬರುತ್ತದೆ ಎನ್ನುವ ಭೀತಿ ಕಾಡುತ್ತಿರುತ್ತದೆ. ಈ ಭಯ ನಮ್ಮನ್ನು ಗುರುತಿಸಲಾಗದ ರೀತಿಯಲ್ಲಿ ಬದಲಾಯಿಸಿದೆ. ಸಾಮಾಜಿಕ, ಸಾಂಸ್ಕೃತಿಕ ಹಾಗು ಧಾರ್ಮಿಕ ಸಮಾರಂಭಗಳು ಅನಿವಾರ್ಯ ಎಂದು ನೋಡುತ್ತಿರುವ ಹೊತ್ತಿನಲ್ಲೇ ಶಾಲೆಗಳನ್ನು ತೆರೆಯುವುದು ಹಿನ್ನೆಲೆಗೆ ಸರಿದಿದೆ. ಹಲವೆಡೆ ಮಕ್ಕಳು ಹೊರಗೆ ಕಾಲಿಡಲು ಆರಂಭಿಸಿದ್ದಾರೆ ಮತ್ತು ಕೆಲವು ಆಟದ ಮೈದಾನಗಳಲ್ಲಿ ಮಕ್ಕಳು ಹಾಗು ಯುವಜನರು ಆಟವಾಡುತ್ತಿರುವುದನ್ನು ನೀವು ನೋಡಿರುತ್ತೀರಿ.

ಆದರೆ, ಹೆಚ್ಚು ಸಂಖ್ಯೆಯ ಜನರಿಗೆ ಇಂಥ ಅವಕಾಶ ಸಿಕ್ಕಿಲ್ಲ ಮತ್ತು ಅವರು ಮನೆಯೊಳಗೇ ಇರಬೇಕಾದ ಪರಿಸ್ಥಿತಿ ಎದುರಿಸುತ್ತಿದ್ದು, ಹೊರಗಿನ ಪ್ರಪಂಚದೊಡನೆ ಮುಖಾಮುಖಿ ಬಹಳ ಕಡಿಮೆ ಇದೆ. ಮಕ್ಕಳು ಮತ್ತು ಅವರ ಶಿಕ್ಷಣಕ್ಕೆ ಸಂಬಂಧಿಸಿದಂತೆ, ನಾವು ಹಲವು ಪ್ರಶ್ನೆಗಳನ್ನು ಎದುರಿಸಿದ್ದೇವೆ ಹಾಗು ಕೆಲವು ಆಯ್ಕೆಗಳು ಮತ್ತು ದಾರಿಗಳನ್ನು ಹೊಂದಿದ್ದೇವೆ.

ಕಳೆದ ಒಂದೂವರೆ ವರ್ಷ ಬೇರೆಯದೇ ಅನುಭವವಾಗಿದ್ದು, ಮಕ್ಕಳು ಒತ್ತಡ, ತೀವ್ರ ಕೊರತೆ, ಸ್ಥಳಾಂತರ ಹಾಗು ಕುಟುಂಬದಲ್ಲಿ ಕಾಯಿಲೆ ಮತ್ತು ಸಾವಿನಂಥ ಕೆಟ್ಟ ಸ್ಥಿತಿಯನ್ನು ಎದುರಿಸಿದ್ದಾರೆ. ಮಕ್ಕಳ ಮೇಲೆ ಕಳೆದ ವರ್ಷ ಯಾವ ಪರಿಣಾಮ ಬೀರಿದೆ ಮತ್ತು ಭವಿಷ್ಯದಲ್ಲಿ ಏನಿದೆ ಎನ್ನುವುದು ಸ್ಪಷ್ಟವಾಗಿಲ್ಲ ಹಾಗೂ ಯಥಾಸ್ಥಿತಿ ಮರುಕಳಿಸುವವರೆಗೆ ಬದುಕಲು ನಿರಂತರವಾಗಿ ಹೋರಾಟ ನಡೆಸುವ ಕುಟುಂಬಗಳಲ್ಲಿರುವ ಅಧಿಕ ಸಂಖ್ಯೆಯ ಮಕ್ಕಳ ಮೇಲೆ ಈ ಸಾಂಕ್ರಾಮಿಕ ಯಾವ ಶಾಶ್ವತ ಪರಿಣಾಮ ಉಂಟುಮಾಡಲಿದೆ ಎನ್ನುವುದೂ ಸ್ಪಷ್ಟವಾಗಿಲ್ಲ.

ಈ ಅರ್ಥ ಮಾಡಿಕೊಳ್ಳುವಿಕೆಯ ಹಿನ್ನೆಲೆಯಲ್ಲಿ ನಾವು ಮುಂದಿನ ಪೀಳಿಗೆಯ ಪ್ರಗತಿಗೆ ದಾರಿಯನ್ನು ಹಾಗು ಭವಿಷ್ಯವನ್ನು ನಿರ್ವಹಿಸಲು ಇರುವ ಮಾರ್ಗಗಳ ಕುರಿತು ಆಲೋಚಿಸಬೇಕಿದೆ. ಇಂಥ ಯೋಚನೆಯು ಅವರ ಶಿಕ್ಷಣ, ತಮ್ಮ ಬಾಲ್ಯವನ್ನು ಮತ್ತೆ ಶೋಧಿಸುವಲ್ಲಿ ಹಾಗು ಆತಂಕವನ್ನು ಕಡಿಮೆಗೊಳಿಸಿಕೊಳ್ಳಲು ನೆರವಾಗುವುದಲ್ಲದೆ, ತಮ್ಮ ಸಂಜ್ಞಾನಾತ್ಮಕ ಸಾಮರ್ಥ್ಯ ಮತ್ತು ಜ್ಞಾನದ ಬುನಾದಿಯನ್ನು ಕಟ್ಟಿಕೊಳ್ಳಲು ನೆರವು ನೀಡುವ ಮೂಲಕ ಅವರು ಜೀವನವನ್ನು ನಿರ್ವಹಿಸಲು ಸಹಾಯ ಮಾಡಬೇಕು ಹಾಗೂ ಪರಿಸರ ಮತ್ತು ಭೂಗ್ರಹ ಸೇರಿದಂತೆ ಎಲ್ಲರೂ ಪ್ರಯೋಜನ ಪಡೆದುಕೊಳ್ಳುವಂತೆ ಸಬಲೀಕರಿಸಬೇಕು.

ಸಾಂಕ್ರಾಮಿಕದ ಜೊತೆಗೆ ಜೀವನ:

ಸೋಂಕಿನ ಅವಧಿಯಲ್ಲಿ ಮಕ್ಕಳನ್ನು ತಲುಪಲು ಹಾಗು ತೊಡಗಿಸಿಕೊಳ್ಳಲು ಹಲವು ವಿಧದ ಪ್ರಯತ್ನಗಳನ್ನು ಮಾಡಲಾಯಿತು. ವಿಶಾಲ ವ್ಯಾಪ್ತಿಯ ಈ ಕಾರ್ಯಕ್ರಮಗಳು ಮಕ್ಕಳಿಗೆ ತಕ್ಕಂತೆ ವಿಭಿನ್ನ ಕೇಂದ್ರದೃಷ್ಟಿಯನ್ನು ಹೊಂದಿದ್ದು, ಯಾವ ಮಕ್ಕಳನ್ನು ತಲುಪಬೇಕೆಂದುಕೊಂಡಿದ್ದವೋ ಅವರನ್ನು ತಲುಪುವಂತೆ ಹಾಗು ಅವುಗಳ ವಿಷಯ ಮತ್ತು ರೀತಿಗೆ ಸೂಕ್ತವಾಗಿತ್ತು. ಕೋವಿಡ್-19ರ ಭೀತಿ ಸ್ವಲ್ಪಮಟ್ಟಿಗಾದರೂ ಅಥವಾ ಸಂಪೂರ್ಣ ಕಡಿಮೆಯಾಗುವ ಸ್ಥಿತಿ ಬರಲಿದೆ ಎಂದು ನಾವು ಭರವಸೆ ಹೊಂದಿರುವಾಗ ಮತ್ತು ನಾವು ಕಟ್ಟಬೇಕಾದ ಜಗತ್ತಿನ ಬಗ್ಗೆ ಚಿಂತಿಸುತ್ತಿರುವಾಗ, ಮಕ್ಕಳನ್ನು ಹಾಗು ಸಂವಿಧಾನದ ಪ್ರಸ್ತಾವನೆ ನೀಡಿದ ವಾಗ್ದಾನಗಳನ್ನು ಮನಸ್ಸಿನಲ್ಲಿ ಇರಿಸಿಕೊಳ್ಳಬೇಕಾಗುತ್ತದೆ. ನಮ್ಮನ್ನು ಕಾಡುವ ಜೀವನಾಧಾರದ ಸವಾಲುಗಳು ಹಾಗು ಆರೋಗ್ಯ ಕುರಿತ ನಿರಂತರ ಆತಂಕಗಳ ನಡುವೆ ಇದನ್ನು ಮರೆಯುವುದು ಸುಲಭ. ಜಗತ್ತು ಕನಿಷ್ಠ ಪಕ್ಷ ಮಧ್ಯಮದಿಂದ ಕಡಿಮೆ ಕಾಲಾವಧಿ (ಹಲವು ಪೀಳಿಗೆಗಳು)ವರೆಗೆ ಮೊದಲ ಅಲೆಯ ಮುಂಚಿನ ದಿನಗಳಿಗೆ ಪ್ರಾಯಶಃ ಹೋಗಲಾರದು ಎಂದು ನಿರೀಕ್ಷಿಸುವುದು ಸುರಕ್ಷಿತ ಆಗಬಹುದು. ಆದ್ದರಿಂದ, ಹೊಂದಾಣಿಕೆಯ ಹೊಸ ನಡಾವಳಿಗಳು ಹಾಗು ಹೊಸ ಹಾದಿಗಳು ವಿಕಾಸ ಹೊಂದುತ್ತವೆ. ಈ ಸಹಜತೆಯ ಮೂಲಾಂಶಗಳು ಏನಿರಲಿವೆ ಮತ್ತು ಶಿಕ್ಷಣ ಮಾತ್ರವಲ್ಲದೆ ಮಕ್ಕಳಿಗೆ ಮತ್ತು ಅವರ ಬದುಕಿಗೆ ಅದು ಏನನ್ನು ಸೇರ್ಪಡೆಗೊಳಿಸಲಿದೆ?

ಕಳೆದ ಒಂದು ವರ್ಷಕ್ಕೂ ಹೆಚ್ಚಿನ ಕಾಲ (ಮತ್ತು ಈ ಅವಧಿ ಇನ್ನಷ್ಟು ಮುಂದುವರಿಯಬಹುದು) ಶಾಲೆಯನ್ನು ತಪ್ಪಿಸಿಕೊಂಡ ಮಕ್ಕಳು, ತಮಗೆ ಗೊತ್ತಿದ್ದನ್ನೂ ಮರೆತಿದ್ದಾರೆ. ಸೋಂಕಿನ ಅವಧಿಯಲ್ಲಿ ಯಾವುದು ಅಗತ್ಯವಿದೆಯೋ ಮತ್ತು ಶಾಲೆಗೆ ಮುಖ್ಯವಾದದ್ದೋ ಅಂಥ ಕಲಿಕೆ ಗಮನಾರ್ಹವಾಗಿ ಕುಸಿದಿದೆ ಎಂದು ಹಲವು ಅಧ್ಯಯನಗಳು ಹೇಳಿವೆ. ಶಾಲೆಗಳು ಕಲಿಕೆಯನ್ನು ನಿರ್ವಹಿಸಿದ ರೀತಿ, ತಪ್ಪಾಗಿ 'ಜ್ಞಾನ' ಎಂಬ ಹಣೆಪಟ್ಟಿ ಹಚ್ಚಿದ ಮಾಹಿತಿಯ ತುಣುಕಿನ ಬರಿದೇ ವರ್ಗಾವಣೆಯನ್ನು ಪರಿಗಣಿಸಿದರೆ, ವಿದ್ಯಾರ್ಥಿಗಳು ತಲುಪಿದ ಮಟ್ಟದ ಬಗ್ಗೆ ನಾವು ಹೇಗೆ ಪ್ರತಿಕ್ರಿಯಿಸಬೇಕು ಎಂಬ ಬಗ್ಗೆಸ್ಪಷ್ಟತೆ ಇರಬೇಕಿದೆ.

ಈ ಅವಧಿಯಲ್ಲಿ ವಿದ್ಯಾರ್ಥಿಗಳನ್ನು ತೊಡಗಿಸಿಕೊಳ್ಳಲು ನಡೆಸಿದ ಪ್ರಯತ್ನಗಳಲ್ಲಿ ತಂತ್ರಜ್ಞಾನವನ್ನು ಪ್ರಧಾನ ವಾಹಕವನ್ನಾಗಿ ಮಾಡಿಕೊಳ್ಳಲಾಗಿತ್ತು. ತಂತ್ರಜ್ಞಾನ ಲಭ್ಯವಿಲ್ಲದ ಮಕ್ಕಳನ್ನು ಮೊಹಲ್ಲಾ ಶಾಲೆಗಳ ಮೂಲಕ ಮುಟ್ಟುವ ಪ್ರಯತ್ನಗಳು ವಿರಳವಾಗಿದ್ದವು ಮತ್ತು ಇವನ್ನು ಬಹುವಾಗಿ ಕೆಲವು ಸರ್ಕಾರೇತರ ಶೈಕ್ಷಣಿಕ ಸಂಸ್ಥೆಗಳು ಮುನ್ನಡೆಸುತ್ತಿದ್ದವು. ಹೆಚ್ಚಿನ ಗಮನ ತಂತ್ರಜ್ಞಾನ ಕೇಂದ್ರಿತ ಕಾರ್ಯಕ್ರಮಗಳ ಮೇಲೆ ಇದ್ದಿತ್ತು ಮತ್ತು ಹಲವು ಸಂಘಟನೆಗಳು ಮಕ್ಕಳಿಗಾಗಿ ಸಾಫ್ಟ್‌ವೇರ್ ಸಿದ್ಧಪಡಿಸಿದ್ದರಿಂದ, ಹಲವು ಮಾರ್ಗಗಳು ಅರಳಿದವು. ಆದರೆ, ಇವು ಮಾರುಕಟ್ಟೆ ಕೇಂದ್ರಿತವಾಗಿದ್ದು, ಮೇಲ್ವರ್ಗವನ್ನು ಗುರಿಯಾಗಿಸಿಕೊಂಡಿದ್ದವು ಮತ್ತು ಆ ವರ್ಗದ ಆಸಕ್ತಿಗಳು ಮತ್ತು ಅನುಭವಗಳನ್ನು ಪ್ರತಿಫಲಿಸುತ್ತಿದ್ದವು.

ಹಿನ್ನೆಲೆ:

ಮಕ್ಕಳು ಭಾರೀ ದೂರವನ್ನು ನಡೆದು ಕ್ರಮಿಸುತ್ತಿದ್ದ ಮನಕಲಕುವ ದೃಶ್ಯಗಳು ಈಗಾಗಲೇ ಮರೆತುಹೋಗಿವೆ. ವಿಸ್ತೃತ ಸಂವಾದದಲ್ಲಿ, ಹಲವು ಮಕ್ಕಳು ತಾವು ಕ್ರಮಿಸಿಬಂದ ನೋವುಗಳನ್ನು ಮರೆಯಲು ದೀರ್ಘ ಕಾಲ ತೆಗೆದುಕೊಳ್ಳುತ್ತಾರೆ ಎನ್ನುವ ವಾಸ್ತವದ ಗ್ರಹಿಕೆಯೇ ಇಲ್ಲ. ಇಂಥ ಮಕ್ಕಳಲ್ಲಿ ಹಲವರನ್ನು ಪತ್ತೆ ಹಚ್ಚಬಹುದಿತ್ತು ಮತ್ತು ರಕ್ಷಿಸಿ, ಶಾಲೆಗೆ ಕರೆತರಬಹುದಿತ್ತು. ಈಗ ಶಾಲೆಗಳು, ಮಕ್ಕಳು ಮತ್ತು ಅವರ ಕಲಿಕೆಯ ಬಗ್ಗೆ ಸಂದರ್ಭಾನುಸಾರ ಮಾತುಗಳು ಬರುತ್ತಿವೆ. ಶಾಲೆಗಳನ್ನು ಮತ್ತೆ ತೆರೆಯಬೇಕು ಎಂಬಲ್ಲಿನ ಮುಖ್ಯ ಕಾಳಜಿಯೆಂದರೆ, ಮಕ್ಕಳು ಸಾಕಷ್ಟು ಕಲಿತಿಲ್ಲ ಎನ್ನುವುದು ಮತ್ತು ಯಾವುದಾದರೂ ಮಾರ್ಗದ ಮೂಲಕ ಕಡಿಮೆ ಅವಧಿಯಲ್ಲಿ ಹಾಗು ತರಾತುರಿಯಲ್ಲಿ ಅವರಿಗೆ ಕಲಿಸಬೇಕಿದೆ ಎನ್ನುವ ವಾಸ್ತವವಾಗಿದೆ. ಆದರೆ, ಮಕ್ಕಳು ಪಠ್ಯಪುಸ್ತಕದ ಗಣಿತ, ವಿಜ್ಞಾನ, ಸಮಾಜ ವಿಜ್ಞಾನಗಳ ಓದು ಮತ್ತು ಬರವಣಿಗೆಯಿಂದ ತಪ್ಪಿಸಿಕೊಂಡಿದ್ದಾರೆ ಮಾತ್ರವಲ್ಲದೆ, ಹಲವು ಅತ್ಯಂತ ಮುಖ್ಯ ವಿಷಯಗಳಿಂದಲೂ ತಪ್ಪಿಸಿಕೊಂಡಿದ್ದಾರೆ ಎಂಬುದನ್ನು ಮರೆಯಬಾರದು. ಅವರು ಪ್ರಾಯಶಃ ಹಲವು ವಿಷಯಗಳನ್ನು ಕಳೆದುಕೊಂಡಿರಬಹುದು ಮತ್ತು ತೀವ್ರವಾದ ಅನುಭವಗಳನ್ನು ಗಳಿಸಿಕೊಂಡಿರಬಹುದು. ಪ್ರಶ್ನೆಯೇನೆಂದರೆ, ಆ ಬಗ್ಗೆ ಸಮಾಜ ಮತ್ತು ಶಾಲೆಗಳು ಏನು ಮಾಡಬಹುದು? ಜೀವನಾಧಾರ ಉತ್ತಮಗೊಳ್ಳದೆ ಇರುವಾಗ ಮತ್ತು ಸೋಂಕು ಉಳಿದುಕೊಂಡಿರುವಾಗ, ಮಕ್ಕಳ ಹಲವು ವಾಸ್ತವಗಳು ಇನ್ನಷ್ಟು ಕೆಟ್ಟದಾಗಿ ಬದಲಾಗಿವೆ. ಹಿಂದೆ ಇದ್ದುದು ಅಂಗೀಕಾರಾರ್ಹವಾಗಿರಲಿಲ್ಲ ಮತ್ತು ಅದು ಆರ್ಥಿಕವಾಗಿ, ಸಾಮಾಜಿಕವಾಗಿ ದುರ್ಬಲ ವರ್ಗಗಳ ವಿದ್ಯಾರ್ಥಿಗಳನ್ನು ಪ್ರತಿಕೂಲ ಪರಿಸ್ಥಿತಿಯಲ್ಲಿ ಇರಿಸುತ್ತಿತ್ತಲ್ಲದೆ, ಕೆಲವೊಮ್ಮೆ ಹೆಚ್ಚಿನವರು ಯಾವುದೋ ಹಂತದಲ್ಲಿ ತಮ್ಮ ಶಿಕ್ಷಣವನ್ನು ತೊರೆಯುವಂತೆ ಮಾಡುತ್ತಿತ್ತು. ಹಲವು ಕುಟುಂಬಗಳಿಗೆ ಮತ್ತು ಮಕ್ಕಳಿಗೆ ಇಂಥ ಸಾಧ್ಯತೆಗಳು ಕೂಡ ಲಭ್ಯವಿಲ್ಲ ಎಂಬುದನ್ನು ನಾವು ಗಮನಿಸಬೇಕು. ಸೋಂಕಿನ ನಂತರ ಶಿಕ್ಷಣದ ಭವಿಷ್ಯದ ಬಗ್ಗೆ ಚಿಂತಿಸುವಾಗ ಈ ಕಾಳಜಿಗಳನ್ನು ಪರಿಗಣಿಸಬೇಕಾಗಿ ಬರುತ್ತದೆ.

..............

ಬಾಕ್ಸ್ (ಪುಟ 4)

ಸೋಂಕಿನ ಕಾಲದ ಶೈಕ್ಷಣಿಕ ಅನುಭವದ ಈ ವಿಶ್ಲೇಷಣೆಯು ಹೊಸ ಸಹಜತೆಯು ಹೇಗಿರಬೇಕು ಎಂಬ ಬಗ್ಗೆ ಆಲೋಚಿಸಲು ನಮಗೆ ನೆರವಾಗುತ್ತದೆ. ಶಿಕ್ಷಣ ವ್ಯವಸ್ಥೆಯು ತೀವ್ರ ಅಸಮಾನತೆ ಹಾಗು ಸಮತೂಕವಿಲ್ಲದ ಆದ್ಯತೆಗಳಿಂದ ನರಳುತ್ತಿದೆ. ಅತಿ ಕಾಳಜಿ ವಹಿಸುವ ಕೆಲ ಪೋಷಕರ ಆತಂಕವು ವ್ಯವಸ್ಥೆಯ ಸಂಸ್ಕೃ ಮತ್ತು ದಿಕ್ಕನ್ನು ನಿಯಂತ್ರಿಸುತ್ತಿದ್ದು, ಇವರು ಮಕ್ಕಳು ಮತ್ತು ವ್ಯವಸ್ಥೆಯ

ಮೇಲೆ ಒತ್ತಡ ಹೇರುತ್ತಿದ್ದಾರೆ. ವಿದ್ಯಾರ್ಥಿ ಗಳಿಗೆ ಕಲಿಕೆ ಮತ್ತು ಸಾಧನೆಗೆ ಬೇಕಾದ ಎಲ್ಲ ವಸ್ತು ಹಾಗು ಮಾರ್ಗಗಳನ್ನು ಪೂರೈಸುತ್ತ, ಅವರು ಕ್ಷಿಪ್ರವಾಗಿ ಮತ್ತು ಗಮನಾರ್ಹ ಫಲಿತಾಂಶವನ್ನು ನೀಡಬೇಕೆಂದು ನಿರೀಕ್ಷಿಸಲಾಗುತ್ತದೆ. ಹೆಚ್ಚಿನವರು ತಲುಪಲು ಕಷ್ಟವಾಗುವ ನಿರೀಕ್ಷೆಗಳಿಗಾಗಿ ಅವರು ಸಕಲ ಸಂಪನ್ಮೂಲಗಳನ್ನು ಯಶಸ್ವಿಯಾಗಿ ಕ್ರೋಡೀಕರಿಸುತ್ತಾರೆ. ತೀವ್ರವಾಗಿ ಶ್ರೇಣೀಕೃತಗೊಂಡ ಶಾಲಾ ವ್ಯವಸ್ಥೆಯಲ್ಲಿ ಬೇರೆಬೇರೆ ವಿದ್ಯಾರ್ಥಿಗಳಿಗೆ ಲಭ್ಯವಾಗುವ ವೈವಿಧ್ಯಮಯ ಸೌಲಭ್ಯಗಳು ಅವರ ಕಲಿಕೆಯು ಬೇರೆಯದೇ ರೀತಿ ಆಗುವ ಅವಕಾಶ ಒದಗಿಸುತ್ತದೆ. ಇದು ಅನನುಕೂಲದಿಂದಲೇ ಆರಂಭಿಸುವ ಮತ್ತು ನಿಯಮಿತ ಅವಕಾಶಗಳಿರುವ ಮಕ್ಕಳಲ್ಲಿ ತಮ್ಮನ್ನು ತಲೆಎತ್ತದಂತೆ ಮಾಡಿಬಿಡುತ್ತಾರೆ ಎಂಬ ಭಾವನೆ ಹುಟ್ಟಿಸುತ್ತದೆ. ಬಹುತೇಕ ಪ್ರಸಂಗಗಳಲ್ಲಿ ಮಕ್ಕಳ ಕಲಿಕೆ ಅಥವಾ ಅವರು ಶಿಕ್ಷಣವನ್ನು ಬಳಸಿಕೊಳ್ಳುವಲ್ಲಿನ ಅನನುಕೂಲವನ್ನು ಬಗೆಹರಿಸಲು ಪೋಷಕರಿಗೆ ಸಮಯ, ಸಂಪನ್ಮೂಲ, ಆತ್ಮವಿಶ್ವಾಸ ಅಥವಾ ಸಂಕಲ್ಪ ಇರುವುದಿಲ್ಲ.

.....................................

ವಾಸ್ತವವೇನೆಂದರೆ, ನಮ್ಮ ಶಾಲೆಗಳು ವೈವಿಧ್ಯಮಯ ಹಿನ್ನೆಲೆಯ ಮಕ್ಕಳನ್ನು ಒಂದೆಡೆ ಸೇರಿಸಿ ಮುಖಾಮುಖಿ ಆಗುವಂತೆ ಮತ್ತು ಒಬ್ಬರು ಇನ್ನೊಬ್ಬರ ಬದುಕಿನ ಬಗ್ಗೆ ತಿಳಿದುಕೊಳ್ಳುವ ಮೂಲಕ ಕೆಲವರ ಬದುಕಿನ ರೀತಿಯ ಬಗ್ಗೆ ಸಹಾನುಭೂತಿಯನ್ನು ಹೊಂದುವಂತೆ ಮಾಡುವ ಬದಲಾಗಿ, ನಮ್ಮ ಶ್ರೇಣೀಕೃತ ಶಾಲೆಗಳು ದ್ವೀಪದಂತಾಗುತ್ತಿವೆ. ಶಾಲೆಗಳಲ್ಲಿ ಇನ್ನೊಂದು ರೀತಿಯ ಪ್ರತ್ಯೇಕಿಸುವಿಕೆ ಆರಂಭವಾಗಿದ್ದು, ಇದು ಉಳಿದವರಿಗೆ ಹೋಲಿಸಿದರೆ ಹೆಚ್ಚು ಆಲೋಚನಾ ಕೌಶಲವನ್ನು ಬೆಳೆಸಿಕೊಳ್ಳಲು ಸಾಮರ್ಥ್ಯವಿರುವ ಮಕ್ಕಳನ್ನು ವರ್ಗೀಕರಿಸಿ ಹಾಗು ಗುಂಪುಗಳಾಗಿಸಬೇಕೆಂಬ ಹಂಬಲದಿಂದ ಆರಂಭವಾಗಿದೆ. ಈ ರೀತಿ ವರ್ಗೀಕರಣಗೊಂಡ ಮಕ್ಕಳಿಗೆ ಬೇರೆಬೇರೆ ಪಠ್ಯಕ್ರಮವನ್ನು ನೀಡಲಾಗುತ್ತಿದೆ ಮತ್ತು ಹಾಗಾಗಿ ಬಹುತೇಕರು ಕೇವಲ ನಿಯಮಿತ ಆಶೋತ್ತರಗಳನ್ನಷ್ಟೇ ಹೊಂದಿರಬೇಕಾಗುತ್ತದೆ. ಇದು ಒಂದರ್ಥದಲ್ಲಿ ವ್ಯವಸ್ಥೆಯ ಆಶಯವನ್ನು ದೃಢಪಡಿಸುವ ಔಪಚಾರಿಕ ಸಮ್ಮತಿಯಾಗಿದೆ (ಈಗಾಗಲೇ ಚಾಲ್ತಿಯಲ್ಲಿರುವಂಥದ್ದು). ಇದರರ್ಥವೇನೆಂದರೆ, ಈಗ ಉನ್ನತ ಪ್ರಾಥಮಿಕ ಶಾಲೆಗಳಲ್ಲಿ ಕೂಡ ಮಕ್ಕಳನ್ನು "ಹಗುರ" ಪಠ್ಯಕ್ರಮವನ್ನು ಅಭ್ಯಸಿಸುವವರು, ಆನಂತರ ಪ್ರಾಯೋಗಿಕ ವೃತ್ತಿಪರ ಹಾಗು ಕೌಶಲಾಭಿವೃದ್ಧಿ ಕೋರ್ಸ್‌ಗಳಿಗೆ ತೆರಳುವವರು ಮತ್ತು ಇನ್ನಿತರರು ಉನ್ನತ ಶಿಕ್ಷಣಕ್ಕಾಗಿ "ಅಕಡೆಮಿಕ್" ಪಠ್ಯಕ್ರಮವನ್ನು ಅನುಸರಿಸುವವರು ಎಂದು ಪ್ರತ್ಯೇಕಿಸಲಾಗುತ್ತದೆ. ಕೈಗಳನ್ನು ಬಳಸಿ ಮಾಡುವ ಕೆಲಸಕ್ಕೆ ನೀಡುವ ಪರಿಹಾರದ ಪರಿಷ್ಕರಣೆ ಇಲ್ಲದೆ ಇರುವಾಗ ಮತ್ತು ಅದನ್ನು 'ಕೀಳು' ಎಂದು ಪರಿಗಣಿಸುವುದರಿಂದ, ಇಂಥ ವಿಭಾಗೀಕರಣದ ಪರಿಣಾಮಗಳನ್ನು ಊಹಿಸುವುದು ಸುಲಭ.

ಸೋಂಕು ತತ್ತರಿಸುವಂಥ ಅಸಮತೆಯನ್ನು ಮುನ್ನೆಲೆಗೆ ತಂದರೂ, ಕೆಲಕಾಲ ಅದು ಸ್ಪರ್ಧೆಯ ಬದಲು ಸಹಬಾಳ್ವೆ ಮತ್ತು ಅನುಕಂಪದ ಪ್ರಾಮುಖ್ಯತೆಯನ್ನು ತೋರಿಸಿಕೊಟ್ಟಿತು. 'ಇನ್ನಿತರರು' ಮತ್ತು ಹೀಗಾಗಿ, ಸಮಾನರಲ್ಲದವರು ಎಂದು ಪರಿಗಣಿಸಲ್ಪಟ್ಟವರ ಸಂಕಷ್ಟದ ಬಗ್ಗೆ ಅಪಾರ ನಿರ್ಲಕ್ಷ್ಯ ಮತ್ತು ಅಗೌರವ ಒಂದೆಡೆಯಾದರೆ, ಅವರ ಸುರಕ್ಷತೆ ಬಗ್ಗೆ ಕಾಳಜಿ ವ್ಯಕ್ತವಾಯಿತು ಹಾಗು ಕೆಲಮಟ್ಟಿನ ಸಾಮುದಾಯಿಕ ಬೆಂಬಲ ವ್ಯವಸ್ಥೆ ಮತ್ತು ಸಾಮೂಹಿಕ ಕ್ರಿಯೆಗಳು ನಡೆದವು. ಅಲ್ಪಾವಧಿಗಾದರೂ, "ಕೀಳು ಕೆಲಸ" ಎನ್ನಿಸಿಕೊಳ್ಳುವುದರ ಪ್ರಾಧಾನ್ಯ ಮತ್ತು ಅತ್ಯಗತ್ಯತೆಯ ಪ್ರಾಮುಖ್ಯತೆ ಬಗ್ಗೆ ಅರಿವುಂಟಾಯಿತು. ನಮ್ಮ ಮುಂದಿನ ಸವಾಲೆಂದರೆ, ಶಿಕ್ಷಣ ನಮ್ಮಲ್ಲಿ ಆಳವಡಿಸುವ ಸಾಮಾನ್ಯ ಸೂಕ್ಷ್ಮತೆಯನ್ನು ಪಾಠವನ್ನಾಗಿ ಮಾಡುವುದು. ಆದ್ದರಿಂದ, ಹೊಸ ಯಥಾಸ್ಥಿತಿಯ ಕೀಲಿಕೈಯು ಹೆಚ್ಚು ಸಮಾನವಾದ, ಹೆಚ್ಚು ಒಳಗೊಳ್ಳುವ, ಹೆಚ್ಚು ಸಹಭಾಗಿತ್ವದ

ಮತ್ತು ಸಂವಿಧಾನದ ಮೌಲ್ಯಗಳನ್ನು ಅಳವಡಿಸಿಕೊಂಡಿರುವ ಆತ್ಮೀಯತೆ ಹಾಗು ಮಾನವೀಯವಾದ ವ್ಯಕ್ತಿಗಳನ್ನು ಬೆಳೆಸುವ ಶಿಕ್ಷಣದ ಗುರಿಯನ್ನು ಇರಿಸಿಕೊಳ್ಳಬೇಕು. ಸೋಂಕು ಬಹಿರಂಗಗೊಳಿಸಿದ ಶ್ರೀಮಂತರು ಹಾಗು ಬಡವರ ನಡುವಿನ ಪ್ರಕಟ ಅಸಮಾನತೆಯು ಶಾಸನಬದ್ಧವಾಗಬಹುದು ಮತ್ತು ದೃಢಗೊಳ್ಳಬಹುದು. ಏಕೆಂದರೆ, ಕಡಿತಗೊಂಡ ಸಂಪನ್ಮೂಲ ಮತ್ತು ಇನ್ನಿತರ ಸಾಧ್ಯತೆಗಳಿಂದಾಗಿ ಬಲಹೀನರಿಗೆ ವಿದ್ಯಾಭ್ಯಾಸದ ಅವಕಾಶಗಳು ಕ್ಷೀಣವಾಗಬಹುದು. 'ಅಕಾಡೆಮಿಕ್ ಶಿಕ್ಷಣ'ದ ಅವಕಾಶಗಳಿಗೆ ಶೈಕ್ಷಣಿಕ ಸಾಧನೆ ಅತ್ಯಗತ್ಯ ಎನ್ನುವ ಒತ್ತನ್ನು ಆರಂಭದ ಹಂತದಿಂದಲೇ ನೀಡಲಾಗಿದೆ. ಇದು ಆರ್ಥಿಕವಾಗಿ ಮಾತ್ರವಲ್ಲದೆ, ಆಲೋಚನೆ ರಚನಾ ವಿಶ್ಲೇಷಣೆಗಳು ಮತ್ತು ಸಾಹಿತ್ಯದಲ್ಲೂ ಪ್ರವೇಶಾವಕಾಶವನ್ನು ನಿರ್ಬಂಧಿಸುತ್ತದೆ. ಪ್ರಸ್ತುತ ಯಾವುದನ್ನು ಪ್ರತಿಭೆ ಎಂದು ವಿಂಗಡಿಸಲಾಗಿರುವುದೋ ಅದನ್ನು ಆಧರಿಸಿ ವಿಂಗಡಿಸುವ ಉಪಕ್ರಮಗಳನ್ನು ನ್ಯಾಯಬದ್ಧ ಹಾಗು ನಿಷ್ಪಕ್ಷಪಾತ ಎಂದು ಪರಿಗಣಿಸಲಾಗುತ್ತದೆ: ಕ್ರೀಡೆಯಲ್ಲಿ ಪ್ರಶಸ್ತಿಗಳು ಮತ್ತು ಉದ್ಯೋಗ ಸೇರಿದಂತೆ ಲಾಭದಾಯಕ ಅವಕಾಶಗಳ ಉಬ್ಬರವು ಸಮರ್ಥರಾದ ಉನ್ನತ ವರ್ಗದವರಿಗೆ ಇಂಥದ್ದೇ ಲಾಭದಾಯಕ ಉಪಕ್ರಮಗಳಿಗೆ ದಾರಿ ಮಾಡಿಕೊಡಬಹುದು. ಹೊಸ ಯಥಾಸ್ಥಿತಿಯು ಇದರ ಮೂರ್ತೀಕರಿಸುವಿಕೆಯಾಗಿ ಕುಸಿಯಬಹುದು. ಇಲ್ಲವೇ ಸಮಾನ ಸಾಧ್ಯತೆಗಳೆಡೆಗಿನ ಸ್ಪಷ್ಟ ಪ್ರಯತ್ನವಾಗಿ ಹೊಮ್ಮುವ ಸಾಧ್ಯತೆಯೂ ಇದೆ. ಈ ಸಾಧ್ಯತೆಯ ಸ್ವಪ್ರಜ್ಞೆಯು ನಾವು ಹೊಸ ಯಥಾಸ್ಥಿತಿ ಬಗ್ಗೆ ಯಾವ ಆಯ್ಕೆಯನ್ನು ಮಾಡಿಕೊಳ್ಳುತ್ತೇವೆ ಎನ್ನುವುದನ್ನು ಆಧರಿಸಿದೆ.

ಹೊಸ ಯಥಾಸ್ಥಿತಿ ಕುರಿತಾದ ಇನ್ನೊಂದು ಆತಂಕವೇನೆಂದರೆ, ಶಿಕ್ಷಣದ ಸಂಜ್ಞಾನಾತ್ಮಕ ಮಾರ್ಗದ ಗುರಿಯನ್ನು ಹೊಂದಿಸುವುದು. ಪಠ್ಯಕ್ರಮದಲ್ಲಿರುವ ವಿಷಯ ಹಾಗು ಪಠ್ಯಕ್ರಮಕ್ಕೆ ಅನುಗುಣವಾಗಿ ವಿದ್ಯಾರ್ಥಿಗಳ ಸಾಧನೆಯ ಸಾಮರ್ಥ್ಯದ ಬಗ್ಗೆ ಕಳೆದ 20 ವರ್ಷಗಳಿಂದಲೂ ಆತಂಕ ಮುಂದುವರಿದೇ ಇದೆ. ಮಕ್ಕಳು ಮಾಹಿತಿಯ ಸಂಗ್ರಹಾಗಾರವಾಗುವ ಬದಲು ಸಾಮರ್ಥ್ಯವನ್ನು ಬೆಳೆಸಿಕೊಳ್ಳುವ ಅಗತ್ಯವಿದೆ ಎನ್ನುವ ವಾದವು ಎಲ್ಲ ಸಂವಾದಗಳಲ್ಲೂ ಹಿಂದಕ್ಕೆ ತಳ್ಳಲ್ಪಟ್ಟಿದ್ದು, ಇದರ ಬದಲು ಮೌಲ್ಯಮಾಪನ ಮತ್ತು ಸಾಧನೆಯ ಜಾಡು ಹಿಡಿಯುವಿಕೆಯನ್ನು ವಿಸ್ತಾರವಾಗಿ ವರ್ಣಿಸಿರುವ ಫಲಿತಾಂಶಗಳು ಕೇಂದ್ರ ಸ್ಥಾನವನ್ನು ಹಿಡಿದುಕೊಂಡಿವೆ. ಮೌಲ್ಯಮಾಪನ ಎನ್ನುವುದು ವಿದ್ಯಾರ್ಥಿಯನ್ನು ಕೆಲವು ಮಾದರಿ ಎಂದು ವಿವರಿಸಲಾದ ನಿರೀಕ್ಷೆಗಳ ಮೂಲಕ ಅಳೆಯುವ ಪ್ರಯತ್ನ. ಈ ನಿರೀಕ್ಷೆಗಳನ್ನು ಆಶ್ಚರ್ಯಕರವಾಗಿ ವಯಸ್ಸೊಂದಕ್ಕೆ ಮಾದರಿ ಮತ್ತು ಸೂಕ್ತ ಎಂದು ಪರಿಗಣಿಸಲಾಗಿದೆ; ವಾಸ್ತವವೆಂದರೆ, ಬಹುತೇಕ ಮಕ್ಕಳು ಈ ಸಾಮರ್ಥ್ಯವನ್ನು ಗಳಿಸಲು ಮತ್ತು ನಿರೀಕ್ಷಿತ ಕಲಿಕಾ ಹಂತವನ್ನು ಗಳಿಸಲು ಸಾಧ್ಯವಿಲ್ಲ ಎನ್ನುವುದು ಗೊತ್ತಿದೆ. ಮತ್ತು, ಶಾಲೆಗಳು ಆರಂಭಗೊಂಡಾಗ ವಿದ್ಯಾರ್ಥಿಗಳು ಶಾಲೆ ಮುಚ್ಚಿದ ಅವಧಿಯಲ್ಲಿ ಮಾಡಬೇಕಿದ್ದ ಎಲ್ಲ ಕೆಲಸವನ್ನೂ ಮಾಡಿ ಮುಗಿಸಬೇಕೆಂದು ನುಗ್ಗುವುದು ಬೇಡ. ವಿದ್ಯಾರ್ಥಿಗಳಿಗೆ ತಮಗೆ ಗೊತ್ತಿರುವುದಕ್ಕೆ ಮತ್ತು ಮಾಡಬಹುದಾಗಿದ್ದಕ್ಕೆ ಸೇರ್ಪಡೆಗೊಳಿಸಲು ಆಗಿಲ್ಲ: ಆದರೆ, ಅವರು ಸಾಕಷ್ಟು ಗೊತ್ತಿದ್ದನ್ನೂ ಮರೆತಿದ್ದಾರೆ.

ಶಿಕ್ಷಣದಲ್ಲಿ ತಂತ್ರಜ್ಞಾನ:

ಸಮಾಜ ಶ್ರೇಣೀಕರಣಗೊಂಡಿರುವ ಪ್ರಸ್ತುತ ಸನ್ನಿವೇಶದಲ್ಲಿ ಶಿಕ್ಷಣದಲ್ಲಿ ತಂತ್ರಜ್ಞಾನದ ಬಳಕೆಯನ್ನು ಎಚ್ಚರಿಕೆಯಿಂದ ಪರಿಗಣಿಸಬೇಕಾಗುತ್ತದೆ. ಒಂದು ವೇಳೆ ಸಂಪನ್ಮೂಲಗಳ ಕೊರತೆ ಇಲ್ಲದೆ ಇದ್ದಲ್ಲಿ, ಉದ್ಭವವಾಗುವ ಪ್ರಶ್ನೆ ಏನೆಂದರೆ: ಕಲಿಕೆಗೆ ತಂತ್ರಜ್ಞಾನದ ಬಳಕೆಯು ಗಣನೀಯವಾಗಿ ನೆರವಾಗುತ್ತದೆ ಎನ್ನುವುದಕ್ಕೆ ಏನಾದರೂ ಸಾಕ್ಷ್ಯಗಳಿವೆಯೇ? ಉತ್ತಮ ಪೂರಕ

ಬೆಂಬಲವಾಗಿ ಮುಂದುವರಿಯಲು ಅದು ಸರಿಯಾದ ದಿಕ್ಕೇ? ಎನ್ನುವುದು ಸೋಂಕು ಕಣ್ಮರೆಯಾಗುವುದಿಲ್ಲ ಮತ್ತು ಇಂಥ ಇನ್ನಷ್ಟು ಸಂಕಷ್ಟಗಳು ಸೃಷ್ಟಿಯಾಗಬಹುದು ಎನ್ನುವ ವಾಸ್ತವಿಕ ಹಿನ್ನೆಲೆಯಲ್ಲಿ ಇನ್ನೂ ಹೆಚ್ಚು ತಂತ್ರಜ್ಞಾನ ಆಧಾರಿತ ಶಿಕ್ಷಣ ಮತ್ತು ಕಲಿಕೆ ಉಪಕ್ರಮಗಳೆಡೆಗೆ ಮುನ್ನಡೆಯಬೇಕು ಎನ್ನುವ ವಾದಕ್ಕಿಂತ ವಿಭಿನ್ನವಾದುದು ಇದು. ಇಂಥ ಉಪಕ್ರಮಗಳನ್ನು ಉತ್ತಮವಾಗಿ ಪರಾಮರ್ಶನ ಮಾಡಬಹುದು ಮತ್ತು ಶಿಕ್ಷಕರಿಗೆ ಕೇಂದ್ರೀಯ ಮಾರ್ಗದರ್ಶನ ಲಭ್ಯವಾಗುತ್ತದೆ ಮತ್ತು ಬಹಳ ಮುಖ್ಯವಾಗಿ, ಮಕ್ಕಳಿಗೂ ಕೂಡ ದಿಗ್ದರ್ಶನ ಸಿಗುತ್ತದೆ.

ತಂತ್ರಜ್ಞಾನದ ಅಧಿಕ ಬಳಕೆ ಮತ್ತು ಸಾಫ್ಟ್‌ವೇರ್‌ಗಳ ಅಭಿವೃದ್ಧಿ ಹಾಗು ಪ್ರವೇಶಾವಕಾಶ ಹೆಚ್ಚಳಕ್ಕೆ ಈಗಾಗಲೇ ವರಾತ ಹೆಚ್ಚಿದೆ. ತಂತ್ರಜ್ಞಾನದ ಬಳಕೆ ಮತ್ತು ಅದು ಅಜಾಗರೂಕತೆಯಿಂದ ಯಾವ ದಿಕ್ಕನ್ನು ಪ್ರೋತ್ಸಾಹಿಸಬಹುದು ಎಂಬ ಪ್ರಶ್ನೆಯನ್ನು ನಾವು ಪರಿಗಣಿಸಬೇಕಾದ ಅಗತ್ಯವಿದೆ. ಬಹುತೇಕ ಮಕ್ಕಳು ಆನ್‌ಲೈನ್ ತರಗತಿಗಳಿಗೆ ಸಮ್ಮತಿಸಿಲ್ಲ ಮತ್ತು ಶಾಲೆಗಳಿಗೆ ಮರಳಲು ಉತ್ಸುಕರಾಗಿದ್ದಾರೆ ಎನ್ನುವುದು ನಮಗೆ ಗೊತ್ತಿದೆ. ತಂತ್ರಜ್ಞಾನದ ಅಧಿಕ ಬಳಕೆಯಿಂದ ಜನರು ಹೆಚ್ಚು ವಿಭಜಿತರಾಗುವುದು ಮತ್ತು ಸಾಮಾಜಿಕವಾಗಿ ಹಾನಿಕರವಾದ ಆಲೋಚನೆಗಳು ಸೇರಿದಂತೆ ತಪ್ಪು ಮಾಹಿತಿ ಹರಡುವಿಕೆಯ ಹೆಚ್ಚಳವನ್ನು ನಾವು ನೋಡಿದ್ದೇವೆ. ಮನುಷ್ಯರ ಮುಖಾಮುಖಿ ಹಾಗು ಅನುಭವಗಳ ಸಮ್ಮಿಲನ ಕಡಿಮೆಯಾಗುವುದರಿಂದ, ಪ್ರತ್ಯೇಕಿಸುವಿಕೆ ಮತ್ತು ಅಪನಂಬಿಕೆಗಳ ಪ್ರಸರಣದ ಅಪಾಯ ಹೆಚ್ಚುತ್ತದೆ. ಕಾರಣ ಯಾವುದೇ ಇರಲಿ, ಮನುಷ್ಯರ ಸಂಪರ್ಕವನ್ನು ಕಡಿತಗೊಳಿಸುವ ಹೊಸ ಉಪಕ್ರಮಗಳು ಉತ್ತಮ ಆಯ್ಕೆಯಾಗುವುದಿಲ್ಲ. ತಂತ್ರಜ್ಞಾನದ ಸಮಾನ ಬಳಕೆಯಿಂದ ಹಾನಿಯಿಲ್ಲ. ಆದರೆ, ಅದು ಶಾಲೆಗೆ ಜೊತೆಯಾಗಿ ಇರಬೇಕು. ಅಧಿಕ ಸಹಭಾಗಿತ್ವ ಮತ್ತು ಸಹಕಾರಿ ಕಲಿಕೆಯನ್ನು ಪ್ರೋತ್ಸಾಹಿಸುವ ಮತ್ತು ಸ್ಪರ್ಧೆ ಮತ್ತು ಒತ್ತಡವನ್ನು ಕಡಿಮೆಗೊಳಿಸುವಂತಿರಬೇಕು. ಲಭ್ಯ ಆಯ್ಕೆಗಳು ಹೆಚ್ಚು ಸಮನಾಗಿಲ್ಲದಿದ್ದರೆ ಮತ್ತು ಆರಂಭದಲ್ಲೇ ಶೋಧಿಸುವ ಪ್ರಕ್ರಿಯೆ ಶುರುವಾಗದಿದ್ದರೆ, ಶೈಕ್ಷಣಿಕ ವ್ಯವಸ್ಥೆಯಲ್ಲಿ ಸ್ಪರ್ಧೆಯನ್ನು ಹಾಗು ಒತ್ತಡವನ್ನು ಕಡಿಮೆ ಮಾಡಲು ಆಗುವುದಿಲ್ಲ.

ಪ್ರಶ್ನೆಯೇನೆಂದರೆ, ನಾವು ಮಕ್ಕಳನ್ನು ಹೋಲಿಸಲು ಕೇಂದ್ರೀಯವಾಗಿ ವಿವರಿಸಲ್ಪಟ್ಟ ಕಲಿಕಾ ಫಲಿತಾಂಶ ಮತ್ತು ಮಾದರಿಗಳ ಜಾಡು ಹಿಡಿಯುವ ತಾಂತ್ರಿಕ ಸಾಧನಗಳನ್ನು ಬಲಪಡಿಸುತ್ತೇವೆಯೇ ಅಥವಾ ಗುರಿಯಿರುವ ನಿರೀಕ್ಷೆಗಳನ್ನು ನಿರ್ಧರಿಸಲು ಸಮುದಾಯ ಹಾಗು ಶಿಕ್ಷಕರ ನೇತೃತ್ವದ ಉಪಕ್ರಮಗಳೆಡೆಗೆ ಮುನ್ನಡೆಯುತ್ತಿದ್ದೇವೆಯೇ? ಮನುಷ್ಯರ ಮುಖಾಮುಖಿಯನ್ನು ಸ್ಥಳಾಂತರಿಸಲು ತಂತ್ರಜ್ಞಾನವನ್ನು ಬಳಸಬೇಕೆಂಬ ಪ್ರಚೋದನೆಯಿಂದಾಗಿ, ಮನುಷ್ಯರ ಸಂಪರ್ಕದ ಪ್ರಾಮುಖ್ಯತೆಯನ್ನು ಗುರುತಿಸಬೇಕಾದ ಅಗತ್ಯವಿದೆ ಮತ್ತು ಅದನ್ನು ಆಗುಮಾಡಬೇಕಿದೆ. ತಂತ್ರಜ್ಞಾನದ ಅತಿ ಬಳಕೆಗೆ ಮುಂದಾಗುವುದು ಬಹಳ ಸುಲಭ: ಸಾಕಷ್ಟು ಹೂಡಿಕೆಯಿಂದ ಅದು ಈಗಿರುವುದಕ್ಕಿಂತ ಉತ್ತಮಗೊಳ್ಳುತ್ತದೆ. ಕಳೆದ 20 ವರ್ಷದಲ್ಲಿ ಆನ್‌ಲೈನ್ ಕಲಿಕೆಯಲ್ಲಿ ಗಮನಾರ್ಹ ಹೂಡಿಕೆ ನಡೆದಿದೆ. ಮತ್ತು, ಸೋಂಕು ಅದನ್ನು ಬಹುವಿಧವಾಗಿ ಹೆಚ್ಚಿಸಿದೆ. ಸರ್ಕಾರದ ಶಾಲೆಗಳಿಗೆ ಹೋಗುವ ಹಿಂದುಳಿದ ಹಿನ್ನೆಲೆಯ ಮಕ್ಕಳ ಆತಂಕವು ದುಬಾರಿ ಖಾಸಗಿ ಶಾಲೆಗಳಿಗೆ ಹೋಗುವ ಶ್ರೀಮಂತ ಮಕ್ಕಳ ಪೋಷಕರ ಆತಂಕಕ್ಕಿಂತ ಭಿನ್ನವಾದುದು. ಆರ್ಥಿಕವಾಗಿ ದುರ್ಬಲ ಹಿನ್ನೆಲೆಯ ಮಕ್ಕಳು ಆದಷ್ಟು ಬೇಗ ಶಾಲೆ ತೆರೆಯಲಿ ಹಾಗು ನಿಯತವಾಗಿ ಕಾರ್ಯ ನಿರ್ವಹಿಸಲಿ ಎಂದು ಆಶಿಸುತ್ತಾರೆ. ಉನ್ನತ ವರ್ಗದವರು ಎರಡೂ ವಿಧದೆಡೆಗೆ ನೋಡುತ್ತಲೇ, ತಾಂತ್ರಿಕ ಬೆಂಬಲದ ವೈಯಕ್ತಿಕ ಕಲಿಕೆಗೆ ವಾಲುತ್ತಾರೆ. ಗ್ರಾಮೀಣ ಬಡ ಮಕ್ಕಳ ಆಸಕ್ತಿ ಶಾಲೆ ತೆರೆಯುವುದ ರಲ್ಲಿ ಇದೆ. ಕೊಳೆಗೇರಿಗಳ ಮಕ್ಕಳಿಗೆ ಕೂಡ ಸಕಲ ಮುನ್ನೆಚ್ಚರಿಕೆಯೊಂದಿಗೆ ನಿರಂತರವಾಗಿ

ನಡೆಯುವ ಬಸ್ತಿ ಶಾಲೆಗಳು ಬಿಟ್ಟರೆ ಬೇರೆ ಪರ್ಯಾಯವಿಲ್ಲ. ನಾವು ಹುಡುಕುವ ಅಲ್ಪಾವಧಿ ಪರಿಹಾರಗಳು ದೀರ್ಘಾವಧಿಯ ಕಾಳಜಿಗಳೊಂದಿಗೆ ಮತ್ತು ಶಿಕ್ಷಣ ಹೇಗೆ ರಚನೆಯಾಗಿರಬೇಕು ಎನ್ನುವ ನಮ್ಮ ದೃಷ್ಟಿಕೋನದೊಂದಿಗೆ ತಳುಕು ಹಾಕಿಕೊಂಡಿರುತ್ತವೆ.

ತಾತ್ಪರ್ಯ:

ಸೋಂಕು ಕಡಿಮೆಯಾದ ಬಳಿಕ ಮಕ್ಕಳ ಶಿಕ್ಷಣವನ್ನು ಮರುನಿರ್ಮಿಸುವ ಕಾರ್ಯವು ಸವಾಲುಗಳಿಂದ ಕೂಡಿದೆ. ಹೆಚ್ಚು ಸಂಖ್ಯೆಯ ಮಕ್ಕಳು ಇನ್ನಷ್ಟು ಬದಿಗೊತ್ತಲ್ಪಡುವ ಮತ್ತು ಶಿಕ್ಷಣದ ಕೆಲವು ಅವಕಾಶಗಳಿಂದ ಸಂಪೂರ್ಣ ಹೊರತಾಗುವ ಹಾಗು ಆ ಮೂಲಕ ಸಮಾಜದಲ್ಲಿ ಕೆಲವು ಪಾತ್ರಗಳು/ಸ್ಥಾನಗಳಿಂದ ವಂಚಿತರಾಗುವ ಗಂಭೀರ ಅಪಾಯವಿದೆ. ಎಲ್ಲ ಮಕ್ಕಳನ್ನು ಸಮಾನ ಶಿಕ್ಷಣ ವ್ಯವಸ್ಥೆಯೊಂದಿಗೆ ಸೇರ್ಪಡೆಗೊಳಿಸುವ ಮೂಲಕ ಪ್ರಜಾಸತ್ತಾತ್ಮಕ ಮತ್ತು ಸಮಾನ ಅವಕಾಶಗಳಿರುವ ಸಮಮಟ್ಟದ ಮೈದಾನವನ್ನು ನಿರ್ಮಿಸುವುದು, ಕ್ರಮೇಣ ಸಾಮಾಜಿಕ ಸಮ್ಮಿಶ್ರಣ ಹಾಗು ಭ್ರಾತೃತ್ವದ ಭರವಸೆಯನ್ನು ಪೂರ್ಣಗೊಳಿಸಬೇಕಿದೆ. ಇದು ಸಾಧ್ಯವಾಗಬೇಕೆಂ ದರೆ, ಹಿಂದುಳಿದ ಹಿನ್ನೆಲೆಯ ಮಕ್ಕಳು ಎಲ್ಲ ವಿಶೇಷ ಸೌಲಭ್ಯಗಳನ್ನು ಪಡೆದುಕೊಳ್ಳಲು ಭೇಷರತ್ ಬೆಂಬಲ ಖಾತ್ರಿಗೊಳಿಸಬೇಕು: ಅವರು ಎದುರಿಸುವ ಸಂಪನ್ಮೂಲ ಕೊರತೆಯನ್ನು ಪರಿಹರಿಸಬೇಕು ಮತ್ತು ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಉತ್ತಮ ಹಿನ್ನೆಲೆಯಿರುವ ಮಕ್ಕಳ ಜೊತೆ ನಡೆಯಲು ಬೆಂಬಲ ನೀಡಬೇಕು.

ತಂತ್ರಜ್ಞಾನವು ಹೆಚ್ಚೆಂದರೆ ಬೆಂಬಲ ನೀಡಬಹುದು ಮತ್ತು ಹೆಚ್ಚಿನ ಪಾಲನ್ನು ಶಿಕ್ಷಕರು ಮತ್ತು ಸಮವಯಸ್ಕರೊಂದಿಗೆ ಮುಖಾಮುಖಿ, ವಾಚನವಸ್ತುಗಳಾದ ಪಠ್ಯಪುಸ್ತಕಗಳು ಮತ್ತು ಇನ್ನಿತರ ಸಂಪನ್ಮೂಲಗಳ ಬಳಕೆಯಿಂದ ಸಾಧಿಸಬಹುದು ಎನ್ನುವುದನ್ನು ಶಿಕ್ಷಣದ ಮರುವಿನ್ಯಾಸವು ಗುರುತಿಸಬೇಕಾಗಿದೆ. ಶಿಕ್ಷಣದ ಅವಕಾಶ ಮತ್ತು ಸಾಮಾಜಿಕ-ಆರ್ಥಿಕ ಪಾತ್ರಗಳ ಆಯ್ಕೆಯಲ್ಲಿ ಈಗಾಗಲೇ ಇರುವ ಅಸಮಾನತೆಯನ್ನು ಹೆಚ್ಚಿಸುವುದಿಲ್ಲ ಎಂದು ಖಾತ್ರಿಪಡಿಸಿಕೊಂಡು, ರಚನಾತ್ಮಕವಾಗಿ ಕೆಲಸ ಮಾಡುವುದಾದರೆ ಮಾತ್ರ "ಹೊಸ ಯಥಾಸ್ಥಿತಿ'ಯನ್ನು ಆಯ್ಕೆ ಮಾಡಿಕೊಳ್ಳಬೇಕು. ಇದಕ್ಕೆ ಸಂಪೂರ್ಣ ಬದಲಿಸಿದ ಆಲೋಚನೆಗಳು ಹಾಗು ನಂಬಿಕೆಗಳ ಅಗತ್ಯವಿದೆ ಮತ್ತು ಇದು ತಕ್ಷಣ ಸಾಧ್ಯವಾಗುವುದಿಲ್ಲ. ಆದರೆ, ಶ್ರೇಣೀಕರಣವನ್ನು ಹೆಚ್ಚಿಸುವ ಮತ್ತು ಹೆಚ್ಚುತ್ತಲೇ ಹೋಗುವ ಕಂದಕಗಳನ್ನು ಬೆಂಬಲಿಸುವ ಮತ್ತು ಸ್ವೀಕರಿಸುವ ಬದಲು ಪ್ರಜ್ಞಾಪೂರ್ವಕವಾಗಿ ಈ ಗುರಿಯೆಡೆಗೆ ಸಾಗಬೇಕಾಗುತ್ತದೆ.

.............

ಹೃದಯಕಾಂತ್  ದಿವಾನ್ ಶಿಕ್ಷಣ ಕ್ಷೇತ್ರದಲ್ಲಿ 40 ವರ್ಷಕ್ಕೂ ಅಧಿಕ ಕಾಲದಿಂದ ಕಾರ್ಯ ನಿರ್ವಹಿಸುತ್ತಿದ್ದು, ಪ್ರಸ್ತುತ ಬೆಂಗಳೂರಿನ ಅಜೀಂ ಪ್ರೇಮ್‌ಜಿ ಫೌಂಡೇಷನ್‌ನ ಅನುವಾದ ಉಪಕ್ರಮ ತಂಡದಲ್ಲಿ ಕೆಲಸ ಮಾಡುತ್ತಿದ್ದಾರೆ. ಅವರು ಭೋಪಾಲದ ಏಕಲವ್ಯದ ಸಂಸ್ಥಾಪಕ ಸದಸ್ಯ ಹಾಗು ಉದಯಪುರದ ವಿದ್ಯಾಭವನ್ ಸೊಸೈಟಿಯ ಶೈಕ್ಷಣಿಕ ಸಲಹೆಗಾರರು. ರಾಜ್ಯ ಶೈಕ್ಷಣಿಕ ಸಂರಚನೆಗಳ ಮಾರ್ಪಾಟು ಮತ್ತು ನಾವೀನ್ಯತೆ ಪ್ರಯತ್ನಗಳಲ್ಲಿ ತೊಡಗಿಸಿಕೊಂಡಿದ್ದಾರೆ. ಅವರ ಇಮೇಲ್: hardy@azimpremjifoundation.org